ವಿಶ್ವವಿಜ್ಞಾನ ಪ್ರಕಾಶನ ಮಾಲೆ-4

# ಹಿಪ್ಪೊಕ್ರಟೀಸ್

ಬೆ. ಗೋ. ರಮೇಶ್

ವಿಶ್ವವಿಜ್ಞಾನ ಪ್ರಕಾಶನ
ಮಲ್ಲೇಶ್ವರ, ಬೆಂಗಳೂರು-3

ಮೊದಲ ಮುದ್ರಣ : ನವೆಂಬರ್ 1973



ಮುಖಚಿತ್ರ : ಲೋಲಾಕ್ಷ

ಬೆಲೆ : ಒಂದು ರೂಪಾಯಿ

ಮುದ್ರಕರು :

ಶೇಷನಾರಾಯಣ

ವಿಕಾಸ ಮುದ್ರಣ

ಸೌತ್ ಎಂಡ್ ರಸ್ತೆ ಬೆಂಗಳೂರು-೫೬೦೦೦೪

# ಹಿಪ್ಪೊಕ್ರಟೀಸ್

"ಕಾಯಿಲೆಗಳು ದೇವರಿಂದ ಬಂದವುಗಳಲ್ಲ, ಇಲ್ಲವೇ ದೇವರು ಅವನ್ನು ಹಿಂದಕ್ಕೆ ತೆಗೆದುಕೊಳ್ಳುವುದಿಲ್ಲ. ಪ್ರತಿ



ಕಾಯಿಲೆ ಉಂಟಾಗಲು ಒಂದು ಕಾರಣವಿದೆ. ಈ ಕಾರಣ ವನ್ನು ನಾವು ಕಂಡುಹಿಡಿದೆವಾದಲ್ಲಿ ಕಾಯಿಲೆಗೆ ಚಿಕಿತ್ಸೆ

ಮಾಡಬಹುದು, ಗುಣಮುಖರಾಗಬಹುದು. ದೇವಸ್ಥಾನ ಗಳಲ್ಲಿ ಮಲಗುವುದರಿಂದಾಗಲೀ ಮತ್ತು ದೇವರಿಗೆ ಪ್ರಾರ್ಥನೆ ಸಲ್ಲಿಸುವುದರಿಂದಾಗಲೀ ನಾವು ಗುಣಹೊಂದು ತ್ತೇವೆ ಎನ್ನುವ ಮಾತಿನಲ್ಲಿ ನನಗೆ ನಂಬಿಕೆ ಇಲ್ಲ."

ಈ ಮಾತನ್ನು ಹೇಳಿದವನು ಯಾರು ಗೊತ್ತೇ? 'ವೈದ್ಯಶಾಸ್ತ್ರದ ತಂದೆ' ಎನಿಸಿಕೊಂಡ ಹಿಪ್ಪೊಕ್ರಟೀಸ್. ಮನುಷ್ಯನಿಗಲ್ಲದೆ ಮರಕ್ಕೆ ಕಾಯಿಲೆ ಬರುತ್ತದೆಯೆ? ಎಂದು ನಮ್ಮಲ್ಲಿ ಹೇಳುತ್ತಾರಲ್ಲವೆ? ಈ ಕಾಯಿಲೆಗಳು ಬರಲೆಂದು ಯಾರೂ ದೇವರಿಗೆ ಹರಕೆ ಕಟ್ಟಿಕೊಳ್ಳುವು ದಿಲ್ಲ. ಆರೋಗ್ಯವಾಗಿ ಇರಬೇಕಾದರೆ ಅದಕ್ಕಾಗಿ ಕೊಂಚ ಕಷ್ಟಪಡಬೇಕು. ಹಣವನ್ನು ನಾವು ಕಾಪಾಡಿಕೊಳ್ಳು ವುದಿಲ್ಲವೆ ಹಾಗೆ ಆರೋಗ್ಯವನ್ನು ರಕ್ಷಿಸಿಕೊಳ್ಳಬೇಕು. ಅಂದರೆ, ಆರೋಗ್ಯ ಚೆನ್ನಾಗಿರಬೇಕಾದರೆ ಅದನ್ನು ಕೆಡಿಸುವ ಕಾರಣಗಳು ಯಾವುವೂ ಇರಬಾರದು. ಆರೋಗ್ಯ ಕೆಡುವುದಕ್ಕೆ ಮುಖ್ಯವಾದ ಕಾರಣ ನಾವು ನಾವೇ. ಇನ್ನು ಯಾರೂ ಅಲ್ಲ. ಹಿಪ್ಪೊಕ್ರಟೀಸನು ನಾವು ಆರೋಗ್ಯವಾಗಿರಬೇಕಾದರೆ ಏನು ಮಾಡಬೇಕು ಎಂದು ತಿಳಿಸಿದ ಮಹಾವಿಜ್ಞಾನಿ.

ಪುರಾತನ ಜನರು ಕತ್ತಲೆ, ಗಾಳಿ, ಗುಡುಗು, ಮಿಂಚು, ನೀರು ಇವುಗಳಿಗೆಲ್ಲ ದೈವತ್ವವನ್ನು ಕಲ್ಪಿಸಿ,

ಅವನ್ನು ಆರಾಧಿಸುತ್ತಿದ್ದರು. ಗ್ರೀಸ್ ದೇಶದಲ್ಲಿ ಇಂತಹ ಆರಾಧನೆಗಳು ಹೆಚ್ಚು. ಇದಕ್ಕಾಗಿ ಹಲವಾರು ದೇವರು ಗಳೇ ಅಲ್ಲಿ ಇದ್ದರು. ದೇವರುಗಳಿದ್ದ ದೇವಾಲಯಗಳ ಪುರೋಹಿತರು ಎಲ್ಲರಂತೆ ಕಷ್ಟಪಟ್ಟು ಕೆಲಸ ಮಾಡು ತ್ತಿರಲಿಲ್ಲ. ಅವರಿಗೆ ಪೂಜೆ ಮಾಡುವುದೇ ಕೆಲಸ. ಈ ಪೂಜಾ ವಿಧಿಗಳು ಗುಟ್ಟಾಗಿ ಕಾಯಲ್ಪಡುತ್ತಿದ್ದವು. ಇದರಿಂದ ಇತರ ಜನರಿಗೆ ನಂಬಿಕೆ, ಭಯ ಎರಡೂ ಬೆಳೆದುವು. ಅವರುಗಳಿಗೆ ಕಾಯಿಲೆ ಒದಗಿದಾಗ ಅವರು ದೇವಾಲಯಕ್ಕೆ ಬರುವರು. ಪುರೋಹಿತರಿಗೆ ಪ್ರಶ್ನೆ ಹಾಕುವರು. ಪುರೋಹಿತರು "ನೀನು ದೇವರಿಗೆ ಅನ್ಯಾಯ ಮಾಡಿದ್ದೀಯಾ. ಆದರಿಂದ ನಿನಗೆ ಕಾಯಿಲೆ ಯಾಗಿದೆ" ಎಂದು ಹೇಳುವರು. ಏನಾದರೂ ಔಷಧಿ, ಮುಲಾಮು ಕೊಡುವರು, ರೋಗ ವಾಸಿಯಾಗಲಿ, ಆಗದಿರಲಿ, ಜನ ಅದನ್ನು ಪಡೆಯುವರು. ದೇವರ ಕೃಪೆ ನಮ್ಮ ಮೇಲಿಲ್ಲ ಎಂದು ಸುಮ್ಮನಾಗುವರು. ಗ್ರೀಕರಲ್ಲಿ ರೋಮನರಲ್ಲಿ ಈಸ್ಕ್ಯುಲೇಪಿಯಸ್ ಇಂತಹ ಒಬ್ಬ ದೇವರು. ಸತ್ತವರೂ ಬದುಕುವಂತೆ ಮಾಡುವ ಕಲೆ ಅವನಲ್ಲಿದೆ ಎಂದು ಜನರ ತಿಳಿವಳಿಕೆ. ಇಂತಹ ಮೂಢ ನಂಬಿಕೆಗಳ ಕಾಲದಲ್ಲಿ ಹಿಪ್ಪೊಕ್ರಟೀಸನು ಅವತರಿಸಿದನು.

ಕ್ರಿಸ್ತಪೂರ್ವ ೪೬೦ರಲ್ಲಿ ಹಿಪ್ಪೊಕ್ರಟೀಸನು ಗ್ರೀಸ್ ದೇಶದ ಕಾಸ್ ದ್ವೀಪದಲ್ಲಿ ಜನಿಸಿದನು. ಇವನ ತಂದೆ ಒಬ್ಬ ಪುರೋಹಿತ. ಇದೇ ದ್ವೀಪದಲ್ಲಿದ್ದ ಈಸ್ಕ್ಯುಲೇಪಿಯಸ್ ದೇವಾಲಯದಲ್ಲಿ ಇವನಿಗೆ ಕೆಲಸ. ಸಾಮಾನ್ಯವಾಗಿ ಪುರಾತನ ಗ್ರೀಕರಲ್ಲಿ ತಮ್ಮ ದೇಶದ ವಿಜ್ಞಾನಿ, ತತ್ವಜ್ಞಾನಿಗಳ ಜೀವನವನ್ನು ಬರೆದಿಡುವ ಪದ್ಧತಿ. ಆದರೆ ಹಿಪ್ಪೊಕ್ರಟೀಸನ ಜೀವನ ಕುರಿತು ಯಾರೂ ಹಾಗೆ ಬರೆಯದಿದ್ದುದು ಅವನ ಬಗೆಗೆ ಏನೂ ತಿಳಿಯದಾಗಿದೆ. ಎಷ್ಟೋ ಜನ ಹಿಪ್ಪೊಕ್ರಟೀಸನ ಕೃತಿಗಳನ್ನು ಅವನವಲ್ಲ ಎಂದಿದ್ದೂ ಉಂಟು. ಆದರೆ ಗ್ರೀಕರ ಮಹಾತತ್ವಜ್ಞಾನಿ ಪ್ಲೇಟೋನ ಬರಹಗಳು ಇವನ್ನು ಸುಳ್ಳಾಗಿಸಿವೆ. ಪ್ಲೇಟೋ ಮಹಾಋಷಿಯ 'ಪ್ರೋಟಾಗೊರಾಸ್' ಕೃತಿಯ ಪ್ರಕಾರ ಹಿಪ್ಪೊಕ್ರಟೀಸ್ ಮಹಾವೈದ್ಯ. ಸಾಕ್ರಟೀಸ್‌ನ ಕಾಲದವ. ಅವನು ಊರು ಊರುಗಳನ್ನು ಸುತ್ತಿ ವೈದ್ಯಶಾಸ್ತ್ರವನ್ನು ಬೋಧಿಸಿದ ಉಪಾಧ್ಯಾಯ.

ಹಿಪ್ಪೊಕ್ರಟೀಸ್ ಬೆಳಕಿಗೆ ಬರುವ ವರೆಗೂ ವೈದ್ಯಕೀಯ ಚಿಕಿತ್ಸೆಗಳು ಈಸ್ಕ್ಯುಲೇಪಿಯಸ್ ಪುರೋಹಿತರ ಹಿಡಿತದಲ್ಲಿತ್ತು. ಅಲ್ಲಿ ಪುರೋಹಿತರ ಬಳಿಗೆ ಬಂದು ಔಷಧಿಗಳನ್ನು ಪಡೆಯುತ್ತಿದ್ದವರನ್ನು ಗಮನಿಸಿದ

ಹಿಪ್ಪೊಕ್ರೆಟೀಸ್. ಕಾಯಿಲೆಗಳು ದೇವರುಗಳು ತಮ್ಮ ಮೇಲೆ ಅತೃಪ್ತಿಪಟ್ಟು ನಮಗಿತ್ತ ಶಾಪ ಎಂದು ಜನ ಹೇಳುತ್ತಿದ್ದುದನ್ನು ಕಂಡು ಹಿಪ್ಪೊಕ್ರಟೀಸ್‌ನಿಗೆ ಆಶ್ಚರ್ಯವಾಯಿತು! ನಗು ಬಂತು! ದೇವರುಗಳ ಮೇಲೆ ಆವನಿಗೆ ನಂಬಿಕೆ ಇರಲಿಲ್ಲ ಎಂದಲ್ಲ. ಕಾಯಿಲೆಗೂ ಚಿಕಿತ್ಸೆಗೂ ದೇವರಿಗೂ ಏನು ಸಂಬಂಧ ಎಂಬುದೇ ಅವನ ತರ್ಕವಾಗಿತ್ತು. ಪುರೋಹಿತರುಗಳಿಂದ ತಿರಸ್ಕಾರಕ್ಕೊಳಗಾಗಿಯೋ ಔಷಧಿಗಳನ್ನು ಪಡೆದೋ ಹೋಗುತ್ತಿದ್ದವರು ಪ್ರಕೃತಿಸಹಜವಾಗಿ ದೇಹಕ್ಕಿರಬಹುದಾದ ಗುಣಗಳಿಂದ ಜನರು ಬಹು ಬೇಗ ಗುಣಮುಖರಾಗುತ್ತಿದ್ದುದನ್ನು ಅವನು ಗಮನಿಸಿದ. ಅಂದಿನಿಂದ ಜನರು ಮೂಢ ನಂಬಿಕೆಗಳನ್ನು ಬಿಡಬೇಕೆಂದು ಹೇಳುತ್ತ ಬಂದ.

ಹಿಪ್ಪೊಕ್ರಟೀಸನದು ಅವಲೋಕನ ಮತ್ತು ಶೀಮರ್ಶನಗಳ ಹಾದಿ. ಇದಕ್ಕಾಗಿಯೇ ಪ್ರಯೋಗ, ಸತ್ಯಶೋಧನೆ. ರೋಗಗಳ ಬಗ್ಗೆಯಂತೂ ಆತ ಮೂಢ ನಂಬಿಕೆಗಳ ವಿರೋಧಿಯಾದ. ರೋಗಗಳನ್ನು ಗುಣಪಡಿಸುವುದರಲ್ಲಿ ಪ್ರಕೃತಿ (Nature)ಯನ್ನು ಅನುಸರಿಸಿದ. ಪ್ರಕೃತಿಯ ಕ್ರಮದಲ್ಲಿ ಕಾಯಿಲೆಗಳದು ಒಂದು ಪಾತ್ರ. ಅದರ ಮುನ್ನಡೆಯನ್ನು ನಾವು ಕಾದು ತಿಳಿಯಬಹುದು. ಪ್ರಕೃತಿಯ ಮೂಲಕವೇ ಅದನ್ನು ನಿವಾರಿಸಬಹುದು

ಎಂದು ತಿಳಿದ ಹಿಪ್ಪೊಕ್ರಟೀಸ್. ಪ್ರಕೃತಿ ಚಿಕಿತ್ಸೆಯಿಂದ ಮನುಷ್ಯ ತನಗೆ ತಾನೇ ವೈದ್ಯಮಾಡಿಕೊಳ್ಳಬಹುದು. ಮಾನವನ ದೇಹ ಪಂಚಭೂತಗಳಿಂದಾದದ್ದು ಎಂದು ನಿಮಗೆಲ್ಲ ಗೊತ್ತಿದೆಯಲ್ಲವೆ? ಭೂಮಿ (ಮಣ್ಣು), ಬೆಂಕಿ, ಗಾಳಿ, ನೀರು ಮತ್ತು ಆಕಾಶಗಳೇ ಆ ಪಂಚ ಭೂತಗಳು. ಇವೆಲ್ಲದರ ಸೃಷ್ಟಿಕರ್ತ ದೇವರು. ದೇವರ ಸೇವಕರು ನಾವು, ಮನುಷ್ಯರು. ಈ ಐದು ಮಹಾ ಶಕ್ತಿಗಳನ್ನು ಬಳಸಿಕೊಂಡರೆ ಮನುಷ್ಯ ಕಾಯಿಲೆ ಬೀಳ ಲಾರ. ಆರೋಗ್ಯವನ್ನು ಪಡೆಯಬೇಕಾದರೆ ಪ್ರಕೃತಿ ಯಿಂದಲೇ ಸಾಧ್ಯ. ಇದನ್ನು ಹಿಪ್ಪೊಕ್ರಟೀಸ್ ಚೆನ್ನಾಗಿ ಅರ್ಥಮಾಡಿಕೊಂಡ. ಜನಗಳಿಗೂ ಅದನ್ನೆ ಬೋಧಿಸಿದ. ರೋಗಿಗಳ ಚಿಕಿತ್ಸೆಗೆ ಬಹಳ ಸುಲಭವಾದ ಔಷಧಗಳನ್ನು ಬಳಸಿದ. ರೋಗವನ್ನು ಆ ಕ್ಷಣದಲ್ಲಿ ನಿಲ್ಲಿಸಿ ಮತ್ತೆ ರೋಗ ಬೆಳೆಯುವಂಥ ಔಷಧಗಳನ್ನು ಹಿಪ್ಪೊಕ್ರಟೀಸ್ ಉಪಯೋಗಿಸ ಹೋಗಲಿಲ್ಲ.

ಪ್ರಕೃತಿಯೇ ಕಾಯಿಲೆಯನ್ನು ವಾಸಿಮಾಡುವ ಕಾಲದಲ್ಲಿ ಆತ ನಿಯಮಿಸಿದ ಪಥ್ಯ ಕೆಲವರಿಗೆ ಸೇವಿಸಲು ಕಷ್ಟವೆನಿಸುತ್ತಿತ್ತು. ಕಾಯಿಲೆ ಬಿದ್ದಾಗ ವೈದ್ಯರು ಇಂಥದೇ ತಿನ್ನಬೇಕು, ಇದು ತಿನ್ನಬಾರದು ಎಂದೆಲ್ಲ ಹೇಳುವುದಿಲ್ಲವೆ? ಅದೇ ಪಥ್ಯ. ಹಿಪ್ಪೊಕ್ರಟೀಸ್‌ನು

ಜೇನುತುಪ್ಪ, ನೀರು ಇವುಗಳೊಂದಿಗೆ ಯುವೆಕಾಳಿನ (Barley) ಗಂಜಿ ಇಲ್ಲವೆ ಜೇನುತುಪ್ಪ ಮತ್ತು ದ್ರಾಕ್ಷಾರಸ ಇವುಗಳನ್ನು ಪಥ್ಯವಾಗಿ ಹೇಳುತ್ತಿದ್ದ. ಕಾಯಿಲೆಗಳಿಂದ ಮನುಷ್ಯರನ್ನು ಗುಣಮುಖರನ್ನಾಗಿ ಮಾಡುವುದಕ್ಕೆ ನೀರನ್ನು ಹೇರಳವಾಗಿ ಉಪಯೋಗಿಸುತ್ತಿದ್ದ. ಶುಚಿಗೆ ಬಹಳ ಬೆಲೆ ಕೊಟ್ಟಿದ್ದ. ಪ್ರತಿಯೊಬ್ಬ ಮನುಷ್ಯನೂ ಶುಚಿಯಾಗಿರಲು ದಿನವೂ ಸ್ನಾನಮಾಡಬೇಕು ಎಂದು ಹೇಳುತ್ತಿದ್ದ. ನೀರಿನ ವೈಜ್ಞಾನಿಕ ಗುಣಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದ ಹಿಪ್ಪೊಕ್ರೆಟೀಸ್ ಜ್ವರ, ಹುಣ್ಣು ಮೊದಲಾದುವುಗಳಿಗೆ ಬಿಸಿ ಮತ್ತು ತಣ್ಣೀರನ್ನು ಬಳಸಿದ. ಸ್ವಲ್ಪ ಕಾಲ ತಣ್ಣೀರು ಸ್ನಾನವನ್ನು ಮಾಡಿದರೆ ಯಾವ ರೀತಿ ಅದು ಮನುಷ್ಯನ ದೇಹದ ಶಾಖವನ್ನು ಮತ್ತೆ ತಂದುಕೊಟ್ಟು ಸುಖವಾಗಿಡಬಲ್ಲುದು ಎಂಬುದನ್ನು ತೋರಿಸಿಕೊಟ್ಟ.

ಒಮ್ಮೆ ಒಬ್ಬ ಹಿಪ್ಪೊಕ್ರೆಟೀಸನ ಬಳಿ ಬಂದ. ಅವನು ದೇಹಕ್ಷಯದಿಂದ ನರಳುತ್ತಿದ್ದ. ಹಿಪ್ಪೊಕ್ರೆಟೀಸ್ ಅವನಿಗೆ ಊರಾಚೆ ಹೋಗಿ ಸೂರ್ಯಸ್ನಾನ ಮಾಡು ಎಂದು ಹೇಳಿದ. ಸೂರ್ಯಸ್ನಾನವೆಂದರೆ ಸೂರ್ಯನಿಗೆ ದೇಹವನ್ನು ಒಡ್ಡುವುದು ಎಂದು. ಸೂರ್ಯ ಪ್ರಕಾಶದಲ್ಲಿ ಪುಷ್ಟಿ ನೀಡುವ ಅಂಶಗಳಿವೆ ಎಂದು ಹಾಗೆ ಹೇಳಿದ್ದ

ಹಿಪ್ಪೊಕ್ರೆಟೀಸ್. ಆ ರೋಗಿಗೆ ಉತ್ತಮವಾದ ಆಹಾರ ಹಾಗೂ ಹಾಲನ್ನು ಸ್ವೀಕರಿಸಲು ಹೇಳಿದ. ರೋಗಿ ತುಂಬ ದುರ್ಬಲನಾಗಿದ್ದ. ಆದರೂ ಆತ ಸೂರ್ಯಸ್ನಾನ ಮಾಡಿ ಗುಣಮುಖನಾದ. ಅಂತಹವರಿಗೆ ಅದರ ಅಗತ್ಯ ಹೆಚ್ಚು. ಆದರೆ ಎಚ್ಚರಿಕೆ ಅವಶ್ಯ. ಹೀಗೆ ಹಿಪ್ಪೊಕ್ರೆಟೀಸ್ ಮಾಡಿದುದೆಷ್ಟೋ. ಎಲ್ಲದರಲ್ಲೂ ಅವನದು ಒಂದು ಅವಲೋಕನ. ಹಾಗೆ ನೋಡಿ ಪರಿಶೀಲಿಸಿದ ಮೇಲೆ ತೀರ್ಮಾನಕ್ಕೆ ಬರುವ ಜಾಣತನ.

ಆರೋಗ್ಯವನ್ನು ಕಾಪಾಡಿಕೊಳ್ಳುವುದರಲ್ಲಿ ಆತನ ಎರಡು ಮುಖ್ಯ ವಿಧಾನಗಳು ಹೀಗಿವೆ : ೧. ಆರೋಗ್ಯದ ವಾತಾವರಣವನ್ನು ಕಲ್ಪಿಸಿಕೊಳ್ಳುವುದು. ೨. ದುರಭ್ಯಾಸಗಳಿಂದ ದೂರವಿದ್ದು ಉತ್ತಮ ಅಭ್ಯಾಸಗಳನ್ನು ಬೆಳೆಸಿಕೊಳ್ಳುವುದು, ಒಳ್ಳೆಯ ಗಾಳಿಯನ್ನು ಸೇವಿಸುವುದು, ಶುದ್ಧವಾದ ನೀರನ್ನು ಕುಡಿಯುವುದು, ಯೋಗ್ಯವೆನಿಸಿದ ಸ್ಥಳಗಳಲ್ಲಿ ವಾಸಮಾಡುವುದು, ಮಳೆ, ಚಳಿ, ಸೆಕೆಗಾಲಗಳಿಗನುಸಾರವಾಗಿ ಬಾಳಲು ಕಲಿಯುವುದು- ಇವು ಅತಿ ಮುಖ್ಯ ಎಂದು ಹೇಳುತ್ತಾನೆ ಹಿಪ್ಪೊಕ್ರೆಟೀಸ್. ಅವನ ಹೆಸರಾದ ಪುಸ್ತಕ 'ಗಾಳಿ, ನೀರು ಮತ್ತು ಸ್ಥಳ' ಎಂಬುದು. ಇದರಲ್ಲಿ ಅವನು ಇವು ಮೂರರ ಅಗತ್ಯವನ್ನು ವಿಸ್ತಾರವಾಗಿ ಹೇಳಿದ್ದಾನೆ.

ರೋಗಿಗಳನ್ನು ಗುಣಪಡಿಸಿ ಅಷ್ಟಕ್ಕೇ ಅವನು ಕೈ ಬಿಡುತ್ತಿರಲಿಲ್ಲ. ರೋಗದ ಲಕ್ಷಣಗಳನ್ನು ಕಂಡುಹಿಡಿಯುತ್ತಿದ್ದ. ವೈದ್ಯರಾದವರು ರೋಗಿಯನ್ನು ನಿಧಾನವಾಗಿ ಮೊದಲು ಪರೀಕ್ಷಿಸಿ ರೋಗದ ಲಕ್ಷಣಗಳನ್ನು ಗುರುತಿಸಿಕೊಳ್ಳುವಂತೆ ಬೋಧಿಸುತ್ತಿದ್ದ. ಇದಕ್ಕಾಗಿ ಕೆಲವು ವ್ಯವಹಾರ ವಿಧಾನಗಳನ್ನು ಅವನು ಕೊಟ್ಟಿದ್ದಾನೆ. ರೋಗಿಯ ಕಣ್ಣು ಮತ್ತು ಚರ್ಮಗಳನ್ನು ಪರೀಕ್ಷಿಸುವುದು, ದೇಹದ ಉಷ್ಣತೆ ನೋಡುವುದು, ರೋಗಿಯ ಹಸಿವು, ಮಲವಿಸರ್ಜನೆ ಇವುಗಳನ್ನು ವಿಚಾರಿಸುವುದು. ಇವುಗಳನ್ನೆಲ್ಲಾ ಪಟ್ಟಿಮಾಡಿದ್ದಾನೆ ಹಿಪ್ಪೊಕ್ರಟೀಸ್. ಇದನ್ನೆ ರೋಗ ನಿದಾನ (Diagnosis) ಎನ್ನುತ್ತಾರೆ. ಇಂದಿನ ವೈದ್ಯರುಗಳು ಮೊದಲು ಮಾಡುವುದು ಇದನ್ನೆ.

ಹೀಗೆ ಕ್ರಮಬದ್ಧವಾಗಿ ಸತ್ಯಕ್ಕೆ ಲೋಪವಾಗದಂತೆ ಚಿಕಿತ್ಸೆ ನಡೆಸುತ್ತಿದ್ದ ಹಿಪ್ಪೊಕ್ರಟೀಸನ ಕೀರ್ತಿ ಎಲ್ಲೆಡೆಗೂ ಹರಡಿತು. ನಾಗರಿಕರೆನಿಸಿಕೊಂಡವರೂ ಇವನ ಬಗ್ಗೆ ಕೇಳಿ ತಿಳಿದುಕೊಳ್ಳಲು ಮುಂದೆ ಬರುತ್ತಿದ್ದರು. ಒಮ್ಮೆ ಪರ್ಶಿಯಾ ದೇಶದ ರಾಜ ಅರ್ಟಾಕ್ಸೆರ್‌ಕ್ಸೆಸ್ಸನು ಹಿಪ್ಪೊಕ್ರಟೀಸನನ್ನು ತನ್ನ ದೇಶಕ್ಕೆ ಆಹ್ವಾನಿಸಿದ. ಆಗ ಅಲ್ಲಿನ ಜನರು ಯಾವುದೋ ಸಾಂಕ್ರಾಮಿಕ ರೋಗದಿಂದ ನರಳುತ್ತಿದ್ದರು. ಪರ್ಶಿಯನ್ ಸೈನಿಕರೆಷ್ಟೋ ಮಂದಿ ಸಾವಿ

ಗೀಡಾಗಿದ್ದರು. ಹಿಪ್ಪೊಕ್ರ್ರಟೀಸ್ ಬರುವುದಾದರೆ ಅವನಿಗೆ ಅಪಾರವಾದ ಹಣ ಕೊಡುತ್ತೇನೆಂದು ಹೇಳಿದ ದೊರೆ. ಆದರೆ ಆಗ ಪರ್ಶಿಯಾ ಗ್ರೀಸ್ ದೇಶದ ಮೇಲೆ ಯುದ್ಧ ಮಾಡುತ್ತಿತ್ತು. ಹಿಪ್ಪೊಕ್ರ್ರಟೀಸ್ ತಾನು ಹೋಗಿ ಶತೃತ್ವ ಬೆಳೆಸಿರುವ ಪರ್ಶಿಯನ್ ಜನರ ಉಪಚಾರ ಮಾಡುವುದು ಸರಿಯಲ್ಲ ಎಂದು ಸುಮ್ಮನಾದ. ಮಾನ ವೀಯತೆಯ ಪಾಠ ಕಲಿಯಬೇಕವರು ಎಂದುಕೊಂಡ. ಈ ಸನ್ನಿವೇಷವನ್ನು ತೋರಿಸುವ ಒಂದು ಸುಂದರ ಚಿತ್ರ ಪ್ಯಾರಿಸ್ಸಿನ ವೈದ್ಯಕೀಯ ಶಾಲೆಯಲ್ಲಿ ಈಗಲೂ ಇದೆ. ಹಿಪ್ಪೊಕ್ರ್ರಟೀಸ್ ಹಲವಾರು ದೇಶಗಳನ್ನು ಸುತ್ತಿದ. ಹಲವಾರು ಜನರನ್ನು ಕಂಡ. ಹಲವು ಹತ್ತು ರೋಗಗಳಿಗೆ ಚಿಕಿತ್ಸೆ ನಡೆಸಿದ. ಒಮ್ಮೆ ಅಥೆನ್ಸ್ ನಗರಕ್ಕೆ ಬಂದ. ಆಗ ಅಲ್ಲಿನ ಜನರು ಪ್ಲೇಗ್ ವ್ಯಾಧಿಯಿಂದ ನರಳುತ್ತಿದ್ದರು. ಹಿಪ್ಪೊಕ್ರ್ರಟೀಸ್ ಸಾರ್ವಜನಿಕರು ಸೇರುವ ಚೌಕಗಳಲ್ಲಿ ಬೆಂಕಿಯನ್ನು ಹಾಯಿಸಿ ಪ್ಲೇಗ್ ವ್ಯಾಧಿ ಪೀಡಿತ ಜನರು ಗಳನ್ನು ರಕ್ಷಿಸಿದ. ಪ್ಲೇಗಿನ ಮೂಲಗಳು ಸುಟ್ಟು ಭಸ್ಮವಾದವು.

ಹಿಪ್ಪೊಕ್ರ್ರಟೀಸನಿಗೆ ಶಸ್ತ್ರಚಿಕಿತ್ಸೆಯಲ್ಲೂ ಸಾಚಿಕೆ ಇತ್ತು. ಶಸ್ತ್ರಚಿಕಿತ್ಸೆಯನ್ನು ಕುರಿತು ಪುಸ್ತಕವನ್ನೇ ಬರೆದಿದ್ದಾನೆ. ಎಷ್ಟೋ ಜನರ ಮೂಳೆ ಮುರಿತಗಳಿಗೆ

ಚಿಕಿತ್ಸೆ ನಡೆಸಿದ್ದ. ತಲೆ ಗಾಯಗಳಾದವರ ತಲೆಬುರುಡೆಗಳನ್ನು ಎಚ್ಚರದಿಂದ ಕತ್ತರಿಸಿ ಚಿಕಿತ್ಸೆ ಮಾಡಿದ. ಪುರಾತನ ಜನರು ಇದಕ್ಕೆ ಬಹು ಘೋರವಾಗಿ ಚಿಕಿತ್ಸೆ ಮಾಡುತ್ತಿದ್ದರು. "ಕ್ಷುದ್ರ ದೇವರುಗಳು ರೋಗಿಯ ಮೇಲೆ ಕೋಪಗೊಂಡು, ರೋಗಿಯ ತಲೆಬುರುಡೆಯೊಳಗೆ ಹೊಕ್ಕಿದ್ದಾನೆ. ಆದುದರಿಂದ ರೋಗಿಯ ತಲೆಯೊಳಗೆ ತೂತುಮಾಡಿ ಆ ದೇವರುಗಳನ್ನು ಹೊರ ತೆಗೆಯಬೇಕು" ಎಂದು ರೋಗಿಯನ್ನು ಗೋಳುಹುಯ್ದುಕೊಳ್ಳುತ್ತಿದ್ದರು. ಹಿಪ್ಪೊಕ್ರಟೀಸ್ ವೈಜ್ಞಾನಿಕ ರೀತಿಯ ಶಸ್ತ್ರಚಿಕಿತ್ಸೆ ಮಾಡುವುದನ್ನು ಹೇಳಿಕೊಟ್ಟ. ವೈದ್ಯನನ್ನೂ ಶಸ್ತ್ರ ಚಿಕಿತ್ಸಕನನ್ನೂ ಬೇರೆ ಬೇರೆಯಾಗಿ ನೋಡಿದ.

"ನಾನು ಚಾಕುವನ್ನು ಉಪಯೋಗಿಸುವುದಿಲ್ಲ.... ಆದರೆ ಆ ಕಾರ್ಯದಲ್ಲಿ ಪರಿಣತನಾದ ಶಸ್ತ್ರಚಿಕಿತ್ಸಕನಿಗೆ ಅವಕಾಶ ಕೊಡುತ್ತೇನೆ" ಎಂದು ಹೇಳಿದ ಹಿಪ್ಪೊಕ್ರಟೀಸನು ಶಸ್ತ್ರಚಿಕಿತ್ಸಕ (Surgeons)ರಿಗೆ ಅಗ್ರಸ್ಥಾನವನ್ನು ಕೊಟ್ಟ. ಇಂದಿಗೂ ವೈದ್ಯವಿಜ್ಞಾನದಲ್ಲಿ ಶಸ್ತ್ರ ಚಿಕಿತ್ಸಕರದೇ ಮೇಲುಗೈ. ತನ್ನ ಪುಸ್ತಕದಲ್ಲಿ ಶಸ್ತ್ರ ಚಿಕಿತ್ಸಕರ ಕಾರ್ಯವನ್ನು ವಿವರಿಸಿ ಹೇಳಿದ್ದಾನೆ. ಅವರ ಆಯುಧಗಳು, ಉಪಕರಣಗಳು ಹೇಗೆ ತಯಾರಿರಬೇಕು,

ಕೆಲಸ ಮಾಡುವಾಗ ಅವರಿಗೆ ಸಹಾಯಕರು ಇದ್ದರೆ ಯಾವ ಅನುಕೂಲವಿದೆ, ಶಸ್ತ್ರಚಿಕಿತ್ಸಕ ಹೇಗೆ ಕೂರಬೇಕು, ನಿಲ್ಲಬೇಕು ಇಂಥವುಗಳನ್ನು ಪುಟ್ಟ ಪುಟ್ಟ ವಾಕ್ಯಗಳಲ್ಲಿ ಹೇಳಿದ್ದಾನೆ.

ಹಿಪ್ಪೊಕ್ರಟೀಸ್ ವಿಜ್ಞಾನವನ್ನು ಬಹುವಾಗಿ ಪ್ರೀತಿಸುತ್ತಿದ್ದ. ಗ್ರೀಕರು ಸ್ವಾಭಾವಿಕವಾಗಿ ವಿಜ್ಞಾನ, ತತ್ವಜ್ಞಾನಗಳನ್ನು ಶಾಸ್ತ್ರೀಯ ಮರ್ಯಾದೆಯಿಂದ ಕಾಣು ತ್ತಿದ್ದರು. ಹಿಪ್ಪೊಕ್ರಟೀಸನು ಅಂತೆಯೇ. ಜ್ಯೋತಿಷ್ಯ ಶಾಸ್ತ್ರವನ್ನು ನಂಬುತ್ತಿದ್ದ ವೈದ್ಯರನ್ನು ವೈದ್ಯರೇ ಅಲ್ಲ ಎಂದು ಕರೆದಿದ್ದ. ಕೆಲವರು ಹಾಗೆಯೇ ಇದ್ದರು. ರೋಗ ವಾಸಿಯಾಗದಿದ್ದರೆ ಅದು ನಮ್ಮ ಕರ್ಮ ಎನ್ನುತ್ತಿದ್ದರು. ಅಂಥವರು ಹಿಪ್ಪೊಕ್ರಟೀಸನ ದೃಷ್ಟಿಯಲ್ಲಿ ಮೂರ್ಖ ರಾದರು. ಇದಕ್ಕೆ ಪ್ರಬಲವಾದ ಕಾರಣವೂ ಇದೆ. ಕೆಲವರು ವೈದ್ಯರೆನಿಸಿಕೊಂಡವರೂ ರೋಗ ಬರಲು ದೇವರುಗಳೇ ಕಾರಣ, ಎಲ್ಲಾ ಗ್ರಹಚಾರ ಎಂದೇ ಹೇಳು ತ್ತಿದ್ದರು. ಉದಾಹರಣೆಗೆ ಮೂರ್ಛೆರೋಗವ (Epilepsy) ವನ್ನು ಅವರು ಪವಿತ್ರ ಕಾಯಿಲೆ ಎಂದೆನ್ನುತ್ತಿದ್ದರು. ಕೋಪಗೊಂಡ ದೇವರುಗಳ ಶಾಪದಿಂದಾಗಿ ಈ ಕಾಯಿಲೆ ಬರುತ್ತದೆ ಎಂದು ತಿಳಿದಿದ್ದರು. ಮೂರ್ಛೆರೋಗಕ್ಕೆ ಕಾರಣ ಇದುವರೆಗೂ ತಿಳಿದಿಲ್ಲ. ಅದೊಂದು ದೇಹದ

ಸ್ಥಿತಿ. ಮೂರ್ಛೆ ಬೀಳುವುದು, ಸೆಳೆತ ಉಂಟಾಗುವುದು ಅದರ ಲಕ್ಷಣಗಳು. ಹಿಪ್ಪೊಕ್ರೆಟೀಸನಿಗೆ ಇದರ ನಿಜವಾದ ಕಾರಣಗಳನ್ನು ಕಂಡುಹಿಡಿಯಲಾಗದೆ ಹೋದರೂ ಪ್ರಕೃತಿಯ ಹಲವು ಬದಲಾವಣೆಗಳಲ್ಲಿ ಈ ಸ್ಥಿತಿ ಉಂಟಾಗುತ್ತದೆಂದು ತಿಳಿದನು.

ಗ್ರೀಸ್ ದೇಶದ ದುರ್ದೈವ!

ಹಿಪ್ಪೊಕ್ರೆಟೀಸನ ಕಾಲದಲ್ಲಿ ಆ ದೇಶ ಮಾತ್ರ ವೈದ್ಯಕೀಯ ಕಲೆಯನ್ನು ಅಭಿವೃದ್ಧಿಪಡಿಸಲಿಲ್ಲ. ಈಜಿಪ್ಟ್ ಕೂಡ ಈ ಕಲೆಗೆ ಪ್ರಾಶಸ್ತ್ಯವನ್ನು ನೀಡಿತು. ಅಲೆಕ್ಸಾಂಡ್ರಿಯ ನಗರದಲ್ಲಿ ವೈದ್ಯಕೀಯ ಶಾಲೆಯ ನಿರ್ಮಾಣವಾಯಿತು. ಹಲವಾರು ವೈದ್ಯಗ್ರಂಥಗಳನ್ನು ಶೇಖರಿಸಿ ಪುಸ್ತಕಭಂಡಾರದಲ್ಲಿಟ್ಟರು. ಇವುಗಳಲ್ಲಿ ಹಿಪ್ಪೊ ಕ್ರೆಟೀಸನ ಗ್ರಂಥಗಳೂ ಸೇರಿವೆ. ಇದರಲ್ಲಿ ಕೆಲವು 'ಹಿಪ್ಪೊಕ್ರೆಟೀಸ್ ಕಲೆಕ್ಷನ್' ಎಂದು ಹೆಸರಾಗಿವೆ. ಇವನ್ನು ಈಜಿಪ್ಟ್ ಜನರು ಬಹು ಅಮೂಲ್ಯವೆಂದು ತಿಳಿದರು.

ಹಿಪ್ಪೊಕ್ರೆಟೀಸ್ ಬಹುಕಾಲ ಬದುಕಿದ್ದ. ಗ್ರೀಸ್‌ನ ಮುಖ್ಯ ಪ್ರದೇಶಗಳಲ್ಲಿ ವೈದ್ಯಕೀಯ ವಿಷಯಗಳ ಪಾಠ ಹೇಳಿದ. ಕಾಸ್ ದ್ವೀಪದ ಮಧ್ಯಭಾಗದಲ್ಲಿ ಇಂದಿಗೂ

ಒಂದು ಮರವನ್ನು ತೋರಿಸುತ್ತಾರೆ. ಆ ಮರದಡಿಯಲ್ಲಿ ಕುಳಿತು ಹಿಪ್ಪೊಕ್ರಟೀಸನು ಪಾಠ ಹೇಳುತ್ತಿದ್ದ ಎನ್ನು ತ್ತಾರೆ. ಹಿಪ್ಪೊಕ್ರಟೀಸನು ಅನೇಕ ಗ್ರಂಥಗಳನ್ನು ಬರೆದ. ಇವೆಲ್ಲವೂ ಗ್ರೀಕ್ ಭಾಷೆಯಲ್ಲಿದ್ದು ಕೆಲವು ಇಂಗ್ಲಿಷ್ ಭಾಷೆಗೆ ಭಾಷಾಂತರವಾಗಿವೆ. ಈ ಗ್ರಂಥಗಳಲ್ಲಿ ಅವನು ವಿಶೇಷವಾದ ಶೈಲಿಯಲ್ಲಿ ಬರೆದಿದ್ದಾನೆ. ಸಣ್ಣಸಣ್ಣ ಸೂತ್ರ ಗಳ ರೂಪದಲ್ಲಿ ಚೆನ್ನಾಗಿ ನೆನಪಿನಲ್ಲಿಡಬಹುದಾದಂಥ ಸೂಕ್ತಿಗಳನ್ನು ಅವನು ಬರೆದಿದ್ದಾನೆ. ಇವನ್ನು ಇಂಗ್ಲಿಷ್ ನಲ್ಲಿ "ಅಫೋರಿಸಮ್ಸ್" ಎನ್ನುತ್ತಾರೆ. ಹಿಪ್ಪೊಕ್ರಟೀಸನು ನಮಗೆ ಕೊಟ್ಟಿರುವುದರಲ್ಲಿ ಬಹು ಮುಖ್ಯವಾದದ್ದು ಅವನ ಪ್ರತಿಜ್ಞೆ ಹಾಗೂ ವೈದ್ಯಕೀಯ ನಿಯಮಗಳು. ಇಂದಿಗೂ ಎಂದಿಗೂ ಅವನ ನಿಯಮಗಳು ಪ್ರಯೋಜನ ಉಳ್ಳವುಗಳಾಗಿ ಉಳಿದಿವೆ. ಉಳಿಯುತ್ತವೆ.

ಹಿಪ್ಪೊಕ್ರಟೀಸನು ಪ್ರಕೃತಿಯನ್ನು ಚೆನ್ನಾಗಿ ಅಭ್ಯಾಸಮಾಡಿದ್ದ. ಅದರ ಫಲ, ಅವನ ಬರಹಗಳಲ್ಲಿ ಪ್ರಕೃತಿಯಲ್ಲಾಗುವ ಬದಲಾವಣೆಗಳು- ವಾಯುಗುಣ ಇವುಗಳನ್ನು ಕುರಿತು ವಿಸ್ತಾರವಾಗಿ ಹೇಳಿರುವ ರೀತಿ ಇವು ಖಗೋಳ ಶಾಸ್ತ್ರ (Astronomy)ವನ್ನು ಕಲಿಯಬ

ಸಹಾಯ ಮಾಡಿವೆ. ಏಕೆಂದರೆ ಋತುಗಳನ್ನು ನಿರ್ಧರಿಸುವುದರಲ್ಲಿ ಖಗೋಳ ಶಾಸ್ತ್ರದ ಎಂದರೆ ಆಕಾಶದ ಪಾತ್ರ ಹೆಚ್ಚಿನದು.

ಹಿಪ್ಪೊಕ್ರಟೀಸನು ಕಾಲವಾದ ದಿನ ನಿರ್ಧಾರವಾಗಿ ತಿಳಿದಿಲ್ಲ. ಆತ ತನ್ನ ಎಂಬತ್ತೈದರಿಂದ ನೂರ ಹತ್ತು ವರುಷ ವಯಸ್ಸಿನೊಳಗೆ ಸತ್ತಿರಬೇಕೆಂದು ಊಹೆ. ಬಹು ಕಾಲ ಬದುಕಿದ್ದ ಅವನು ಲರಿಸ್ಸಾ ಎಂಬಲ್ಲಿ ಕಾಲವಾದ.

ಅನೇಕ ಮಹಾಪುರುಷರ ಸರಿಯಾದ ವಿವರಗಳು ಹೀಗೆಯೇ ತಿಳಿಯದೆ ಕತ್ತಲಲ್ಲಿ ಉಳಿದು ಹೋಗಿವೆ.

## ಹಿಪ್ಪೊಕ್ರಟೀಸನ ನಿಯಮ

ವೈದ್ಯಕೀಯ ಕಲೆ ಎಲ್ಲ ಕಲೆಗಳಿಗಿಂತಲೂ ಶ್ರೇಷ್ಠವಾದದ್ದು. ಆದರೆ ಅದನ್ನು ಅಭ್ಯಾಸ ಮಾಡುವವರ ಉದಾಸೀನದಿಂದಾಗಿ ಅದು ಹಿಂದೆ ಬಿದ್ದಿದೆ. ನಗರಗಳಲ್ಲಿ ಇಂಥವರನ್ನು ಶಿಕ್ಷಿಸುವ ನಿಯಮಗಳಿಲ್ಲ. ಇಂಥವರು

ದುರಂತ ನಾಟಕಗಳಲ್ಲಿ ಬರುವ ಪಾತ್ರಧಾರಿಗಳಂತೆ. ಅವರು ವೇಷಹಾಕಿಕೊಂಡು ಅಭಿನಯಿಸುವರಷ್ಟೆ ಆದರೆ ಅವರು ನಿಜವಾಗಿ ನಟರಲ್ಲ. ಅಂತೆಯೇ ಎಷ್ಟೊ ಮಂದಿ ನಿಜವಾಗಿ ವೈದ್ಯರಲ್ಲ. ವೈದ್ಯವೃತ್ತಿಯನ್ನು ಅವಲಂಬಿಸುವವರಿಗೆ ಆ ವೃತ್ತಿಯಲ್ಲಿ ಪ್ರೇಮವಿರಬೇಕು, ಗುರುಗಳಿಂದ ಚೆನ್ನಾಗಿ ಪಾಠ ಕಲಿತಿರಬೇಕು. ಸ್ವಭಾವದಿಂದಲೂ ಅವರು ವೈದ್ಯರಾಗಿರಬೇಕು.

ವೈದ್ಯ, ಕಲೆಯ ಸೇವಕ. ರೋಗಿಯೂ ವೈದ್ಯನೂ ರೋಗವನ್ನು ಎದುರಿಸುವುದರಲ್ಲಿ ಪರಸ್ಪರ ಸಹಕಾರ ದಿಂದ ಇರಬೇಕು. ಅನುಭವ ಇರುವವನು ಮಾತ್ರ ವೈದ್ಯವೃತ್ತಿಯನ್ನು ಹಿಡಿಯಬೇಕು, ಬರಿಯ ಬೂಟಾಟಿ ಕೆಗಲ್ಲ, ವೈದ್ಯನಾದವನಿಗೆ ಆತ್ಮ ವಿಶ್ವಾಸವಿರಬೇಕು. ಪ್ರಾಮಾಣಿಕತೆಯೂ ಬೇಕು.

ಇದು ಅವನ ತತ್ತ್ವ.

## ಹಿಪ್ಪೊಕ್ರಟೀಸನ ಪ್ರತಿಜ್ಞೆ

ನೂರಾರು ವರ್ಷಗಳಿಂದ ಹಿಪ್ಪೊಕ್ರಟೀಸನ ಪ್ರತಿಜ್ಞೆ ಕಾನೂನುಬದ್ಧ ವೈದ್ಯರಿಗೂ, ವೈದ್ಯವೃತ್ತಿ

ಹಿಡಿಯುವವರಿಗೂ ಬೆಳಕಾಗಿವೆ. ಮಾನವೀಯತೆ, ವಿಜ್ಞಾನ ದಲ್ಲಿ ಒಲವು ಇವುಗಳನ್ನು ಈ ಪ್ರತಿಜ್ಞೆ ಹಿಡಿದೆತ್ತಿವೆ. ರೋಗಿಗೂ ವೈದ್ಯನಿಗೂ ಇರಬೇಕಾದ ನಿಜವಾದ ನಂಟನ್ನು ಇದು ಸಾರುತ್ತಾ ಬಂದಿದೆ. ಇದೇ ರೀತಿ ಭಾರತ ದೇಶದಲ್ಲಿ ಚಿಂತನೆ ಮಾಡಿದವರು ಚರಕ ಮತ್ತು ಸುಶ್ರುತರೆಂಬ ಆಯುರ್ವೇದಪಂಡಿತರು. ಹಿಪ್ಪೊಕ್ರಟೀಸ್ ತಾನಿರುವ ವರೆಗೂ ತನ್ನ ಪ್ರತಿಜ್ಞೆಯಂತೆಯೇ ನಡೆದುಕೊಂಡ. ಮಹಾವಿಜ್ಞಾನಿಯೆನಿಸಿಕೊಂಡ ಅವನ ಪ್ರತಿಜ್ಞೆಯ ಮುಖ್ಯವಾದ ಕೆಲವು ಭಾಗಗಳನ್ನು ಮಾತ್ರ ಇಲ್ಲಿ ಕೊಡ ಲಾಗಿದೆ.

"ನಾನು, ವೈದ್ಯ ಅಪೋಲೋ, ವೈದ್ಯಾಧಿದೇವತೆ ಈಸ್ಕ್ಯುಲೇಪಿಯಸ್, ಆರೋಗ್ಯಾಭಿಮಾನಿದೇವತೆ ಹಾಗೂ ಇನ್ನಿತರ ಮತ್ತು ದೇವರು ದೇವತೆಗಳ ಮೇಲೆ ಆಣೆಯಾಗಿ ನನ್ನ ಯೋಗ್ಯತೆ ಮತ್ತು ವಿವೇಚನೆಗಳಿಗೆ ಅನುಸಾರವಾಗಿ ನನ್ನ ಈ ಪ್ರತಿಜ್ಞೆಯನ್ನು ಕಾಪಾಡಿಕೊಳ್ಳುತ್ತೇನೆ."

....."ನನ್ನ ಯೋಗ್ಯತೆ ಮತ್ತು ವಿವೇಚನೆಗಳಿಗೆ ಅನುಸಾರವಾಗಿ ನನ್ನ ಬಳಿ ಬರುವ ರೋಗಿಗಳ ಅನು ಕೂಲಕ್ಕಾಗಿ ದೇಹಕ್ಕೆ ಕೇಡನ್ನು ತರುವ, ಕಿರುಕುಳ

ಕೊಡುವ, ಯಾವುದೇ ವಸ್ತುಗಳನ್ನೂ ಬಳಸುವುದಿಲ್ಲ. ನಾನು ಗರ್ಭಿಣಿ ಸ್ತ್ರೀಯರಿಗೆ ಗರ್ಭವಿಳಿಸುವಂಥ ಯಾವ ಸಲಕರಣೆಯನ್ನೂ ಕೊಡುವುದಿಲ್ಲ."

"ನಾನು ಯಾರ ಮನೆಗಳನ್ನು ಒಳಹೊಕ್ಕರೂ ಅಲ್ಲಿ ಕಾಯಿಲೆ ಮಲಗಿರುವವರ ಅನುಕೂಲಕ್ಕಾಗಿ ಹೋಗುತ್ತೇನೆ. ಅಲ್ಲಿ ಹೋದಾಗ ತುಂಟತನಗಳಿಂದ ದೂರವಿರುತ್ತೇನೆ."

"ಯಾರಾದರೂ ಸರಿ, ವೈದ್ಯಕೀಯ ಚಿಕಿತ್ಸಾ ವಿಧಾನಗಳನ್ನು ಕಲಿಯುವ ಇಚ್ಛೆಯಿದ್ದು ನನ್ನ ಬಳಿ ಬಂದಲ್ಲಿ, ನಾನು ಅವರಿಗೆ ಉಚಿತವಾದ ಸಲಹೆಗಳನ್ನೂ ಶಿಕ್ಷಣವನ್ನೂ ನೀಡುತ್ತೇನೆ."

"ನನ್ನ ಈ ಪ್ರತಿಜ್ಞೆಯನ್ನು ನಾನೇ ಮುರಿಯದಂತೆ ಕಾಪಾಡಿಕೊಳ್ಳುತ್ತೇನೆ."

ಎಂತಹ ಉದಾತ್ತ ಪ್ರತಿಜ್ಞೆ ಆತನದು !

## ಸೂಕ್ತಿಗಳು

ಹಿಪ್ಪೊಕ್ರಟೀಸ್ ವಿಜ್ಞಾನಿ. ಅವನ ತೀರ್ಮಾನಗಳು ಪ್ರಯೋಗಗಳಿಂದ ಅವಲೋಕಿಸಲ್ಪಟ್ಟವು. ಇಂತಹ

ತೀರ್ಮಾನ, ಹೇಳಿಕೆಗಳನ್ನು ಅವನು ತನ್ನ ಪುಸ್ತಕಗಳಲ್ಲಿ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಹೇಳಿದ್ದಾನೆ. ಈ ಪ್ರತಿಯೊಂದು ವಾಕ್ಯವೂ ಆಣಿಮುತ್ತೇ. ಈ ವಾಕ್ಯಗಳು ಎಂದೆಂದಿಗೂ ಈ ಮಾನವ ಕುಲಕ್ಕೆ ಪ್ರಯೋಜನವುಳ್ಳವುಗಳಾಗಿವೆ. ಅವನ ಕೆಲವು ಸೂಕ್ತಿಗಳು ಹೀಗಿವೆ:

೧. ತೆಳ್ಳಗಿರುವ ವ್ಯಕ್ತಿಗಳು ಕಡಮೆ ಆಹಾರ ಸ್ವೀಕರಿಸಬಹುದು, ಆದರೆ ಅವು ಪುಷ್ಟಿಯುತವಾಗಿರಬೇಕು. ದಪ್ಪಗಿರುವ ವ್ಯಕ್ತಿಗಳು ಹೆಚ್ಚು ತಿನ್ನಬಹುದು. ಆದರೆ ಅವರು ಬಳಸುವ ಆಹಾರ ಅಲ್ಪ ಸಾರಯುತವಾಗಿರಬೇಕು.

೨. ಚಿಂತೆ, ಆಯಾಸ ಮತ್ತು ಚಳಿಯಿಂದ ನಡುಗುವುದು ಇವುಗಳನ್ನು ದೂರ ಮಾಡಲು ನೀರಿನೊಂದಿಗೆ ಸಮವಾಗಿ ದ್ರಾಕ್ಷಾರಸ ಸೇವಿಸಿ.

೩. ಮುಂಜಾನೆಯ ಹೊತ್ತು ನಡೆಯುವ ಅಭ್ಯಾಸ, ವ್ಯಾಯಾಮವಾದ ಮೇಲೆ ಸ್ವಲ್ಪ ಹೊತ್ತು ನಡೆಯುವುದು, ಮಧ್ಯಾಹ್ನ ಊಟವಾದ ಬಳಿಕ ಕ್ಷಣ ಕಾಲ ನಡೆಯುವುದು ಆರೋಗ್ಯಕ್ಕೆ ಒಳ್ಳೆಯದು.

೪. ಚಳಿಗಾಲದಲ್ಲಿ ಹೆಚ್ಚು ತಿನ್ನಿ ; ಬೇಸಗೆಯಲ್ಲಿ ಕಡಮೆ ತಿನ್ನಿ.

೫. ಸ್ವಾಭಾವಿಕವಾಗಿ ದಪ್ಪಗಿರುವ ವ್ಯಕ್ತಿಗಳು, ತೆಳ್ಳಗಿರುವ ವ್ಯಕ್ತಿಗಳಿಗಿಂತ ಬೇಗನೆ ಸಾಯುವರು.

೬. ಪ್ರೌಢಾವಸ್ಥೆಯನ್ನು ತಲಪುವುದಕ್ಕೆ ಮುಂಚೆಯೆ ಉಬ್ಬಸವ್ಯಾಧಿಯಿಂದ ಇಲ್ಲವೆ ಕೆಮ್ಮಿಗೆ ತುತ್ತಾಗಿ ಗೂನು ಬೆನ್ನಾದವರು, ಸಾಯುವರು.

೭. ಶುದ್ಧವಾದ ದ್ರಾಕ್ಷಾರಸವನ್ನು ಕುಡಿದರೆ ಕಣ್ಣುಗಳಲ್ಲಿ ನೋವು ಮತ್ತು ಉರಿ ಕಡಮೆಯಾಗುವುದು.

೮. ಯಾವುದೇ ಕಾಯಿಲೆಯಲ್ಲಾಗಲೀ ಕಣ್ಣುಗಳಲ್ಲಿ ತಾನಾಗಿಯೇ ನೀರು ಬಂದರೆ, ಒಳ್ಳೆಯ ಲಕ್ಷಣ ಎನ್ನಬೇಕು. ಹಾಗಲ್ಲದೆ ಬಲವಂತವಾಗಿ ಕಣ್ಣೀರು ನಿಮ್ಮ ಪ್ರಯತ್ನದಿಂದ ಬಂದರೆ ಅದು ಒಳ್ಳೆಯದಲ್ಲ.

೯. ವಯಸ್ಸಾದ ವ್ಯಕ್ತಿಗಳಿಗೆ ಕಡಮೆ ಆಹಾರ ಕೊಡಬೇಕು.

೧೦. ನೀವು ಹಸಿದಿರುವಾಗ, ಕೆಲಸಮಾಡಬೇಡಿ.

ಇಂತಹ ಮುದ್ದಾದ ಸೂಕ್ತಿಗಳು ಅನೇಕ ಇವೆ. ಇವು ನೆನಪಿಡಲು ಸುಲಭ. ಆಚರಣೆಯಲ್ಲಿ ತಂದರೆ ಇನ್ನೂ ಒಳ್ಳೆಯದೇ.

ಹಿಪ್ಪೊಕ್ರಟೀಸನಲ್ಲಿ ಬಲವಾದ ಶ್ರದ್ಧೆ, ನಂಬಿಕೆಗಳಿದ್ದವು. ವೈದ್ಯ ವಿಜ್ಞಾನವನ್ನು ಚೆನ್ನಾಗಿ ಅವನು ಅಭ್ಯಸಿಸಿ ವಿಜ್ಞಾನಿಯಾದನು. ರೋಗಿಯನ್ನು ಗುಣಪಡಿಸುವುದರಲ್ಲಿ ರೋಗಿಗೆ ನಂಬಿಕೆ ಬರುವಂತೆ ಚಿಕಿತ್ಸೆ ಮಾಡುತ್ತಿದ್ದನು. ಪ್ರಕೃತಿಯನ್ನು ಪ್ರೀತಿಸಿದನು. ತುಂಬು ಬಾಳು ಬಾಳಿದನು. ಕ್ರಮಬದ್ಧ ಜೀವನ ನಡೆಸುವುದರಿಂದ ಆಯುಷ್ಯ, ಆರೋಗ್ಯ ಎರಡೂ ಗಟ್ಟಿ ಎಂಬುದು ನಾವೆಲ್ಲಾ ಇವನಿಂದ ಕಲಿಯಬೇಕಾದ ಪಾಠ.

---

